ಒಂದಾಣೆ ಮಾಲೆ **202**

# ಧರ್ಮಸಂಕಟ ಅಥವಾ ಕರ್ಣ

(ಪೌರಾಣಿಕ ಏಕಾಂಕ ನಾಟಕ)




ಬರೆದವರು:

ಶ್ರೀ ತದ್ದಲಸೆ ವಿಘ್ನೇಶ್ವರ ಶರ್ಮ,

ಶಿರಸಿ.





**1958**

ಬೆಲೆ: ಒಂದಾಣೆ.

ಒಂದಾಣೆ ಮಾಲೆ, ಮಂಗಳೂರು.

# ಧರ್ಮಸಂಕಟ

## [ಏಕಾಂಕ ನಾಟಕ]

---

### ಪಾತ್ರಗಳು: ಕರ್ಣ, ಕೃಷ್ಣ, ಕುಂತಿ.

### ದೃಶ್ಯ ೧

(ಸಮಯ—ಸಂಧಿಗಾಗಿ ಹಸ್ತಿನಾವತಿಗೆ ಬಂದ ಕೃಷ್ಣನು, ಸಂಗ್ರಾಮವನ್ನೇ ನಿಶ್ಚೈಸಿ ಹಿಂದಿರಳುವಾಗ, ಕರ್ಣನನ್ನು ತನ್ನ ರಥದಲ್ಲಿ ಕೂಡ್ರಿಸಿಕೊಂಡು ತುಸು ದೂರ ತೆರಳುತ್ತಾನೆ. ಆಗ)

ಕರ್ಣ: ಕೃಷ್ಣಾ, ನಿಲ್ಲಿಸು ರಥವನ್ನು! ನಾನು ಹಿಂದಿರುಗುತ್ತೇನೆ.

ಕೃಷ್ಣ: ನಿಲ್ಲಿಸುವೆನು ಕರ್ಣ. ಇನ್ನೂ ತುಸುದೂರ ಸಾಗಲಿ. ಕೆಲವು ಹೊತ್ತಿನ ಹಿಂದೆ ನಿನ್ನ ಕುರುಪತಿಯ ಆಸ್ಥಾನದಲ್ಲಿ ಏನೆಲ್ಲ ನಡೆದುಹೋಯಿತು! ಸಮಗ್ರ ಆರ್ಯಾವರ್ತದ ಚಕ್ರವರ್ತಿ ಎನ್ನಿಸಿಕೊಳ್ಳುವ ಒಂದು ರಾಜಸ್ಥಾನದಲ್ಲಿ ಈ ರೀತಿ ನಡೆಯುವದು ಯುಕ್ತವೇ? ಅದೂ ಕೊನೆಗೆ ರಾಯಭಾರಿಯಾಗಿ ಬಂದವನನ್ನೂ ಕಟ್ಟಹಾಕುವ ಸಾಹಸಮಾಡಿದರಲ್ಲ? ಇದು ನಿಮ್ಮ ರಾಜನಿಗೆ ಭೂಷಣವೆಂದು ತಿಳಿದೆಯಾ? ಆಸ್ಥಾನದಲ್ಲಿರುವ ವೃದ್ಧ ತಂದೆ, ಗುರುಹಿರಿಯ ಭೀಷ್ಮ, ದ್ರೋಣರು, ನೀತಿಜ್ಞ ವಿದುರ, ಇಂಥವರಿಗೆಲ್ಲ ಇದು ಅವಹೇಳನವಲ್ಲವೇ?

ಕರ್ಣ: ಪುರುಷೋತ್ತಮಾ! ಅದನ್ನೆಲ್ಲ ನಿರ್ಣಯಿಸಿಯೇ ಈ ವಿಚಾರ ಕೈಕೊಂಡದ್ದಾಗಿದೆ. ಪ್ರಕೃತ ಕುರು-ಪಾಂಡವರ ಸಿಂಹಾಸನದ ಹಕ್ಕು ಬಾಧ್ಯತೆ ನಿರ್ಣಯಿಸಲು ಯುದ್ಧದ ಹೊರತು ಅನ್ಯಥಾ ಮಾರ್ಗವಿಲ್ಲದ್ದರಿಂದ ನಮಗಿಂದು ಬೇಕಾದುದು ಯುದ್ಧ. ಪುನಃ ಅದನ್ನೇ ತಿಳಿಸಲು ಮತ್ತೆ ಇಲ್ಲಿಯ ತನಕ ಕರತಂದೆಯಾ? ನಿನ್ನ ರಥದಲ್ಲಿ ಇಲ್ಲಿಯ ವರೆಗೆ ನಾನು ಬಂದದ್ದನ್ನು ನೋಡಿದರೆ ಕುರುಬಳಗ ಏನಾದರೂ ಶಂಕಿಸಲಾರದೇ ಕೃಷ್ಣಾ?

ಕೃಷ್ಣ: ನೀನು ಕುರುಬಳಗದವನಲ್ಲ. ಹಸ್ತಿನಾವತಿಯಿಂದ ನಾವೀಗ ದೂರ ಬರುತ್ತಿರುವಂತೆ ನೀನೂ ಅವರಿಂದ ದೂರಾಗಬೇಕಾಗಿದೆ. ನಿನ್ನ ಜನ್ಮರಹಸ್ಯ ನಿನಗೆ ತಿಳಿಯದ್ದರಿಂದ ಕುರುಬಳಗದವ ಎಂದು ತಿಳಿದಿರುವೆ. ನಿನ್ನ ನಿಜವಾದ ಜನ್ಮವೃತ್ತಾಂತವನ್ನು ತಿಳಿಸುವ ಉದ್ದೇಶದಿಂದಲೇ ನಿನ್ನನ್ನು ಇಲ್ಲಿಯ ವರೆಗೆ ಕರೆತಂದಿರುವೆ. ನಿನಗೆ ತೊಂದರೆಯಾಗದಿದ್ದರೆ, ನೀನು ಒಪ್ಪಿಕೊಂಡರೆ, ದ್ವಾರಕೆಯ ವರೆಗೂ ನಾವು ಪ್ರಯಾಣ ಬೆಳೆಸಬಹುದು.

ಕರ್ಣ: ಪ್ರಭುವೇ, ನನ್ನ ಜನ್ಮವೃತ್ತಾಂತ ತಿಳಿಸಲು ಇಷ್ಟು ದೂರ ಬರಬೇಕೇ? ನೀನು ವಿದುರನ ಮನೆಗೆ ದಯಮಾಡಿಸಿದಂತೆ ನನ್ನ ಮನೆಗೂ ದಯಮಾಡಿಸಿ ತಿಳಿಸಬಹುದಿತ್ತಲ್ಲ?

ಕೃಷ್ಣ: ಇಲ್ಲ; ನಿನ್ನ ಮನೆಗೆ ಬಂದು ಹೇಳುವುದಕ್ಕಿಂತಲೂ ಇದೇ ಯುಕ್ತವಾದುದೆಂದು ತಿಳಿದೆ. ಅದಕ್ಕಾಗಿ ನಾವು ಇಲ್ಲಿಯ ವರೆಗೆ ಜತೆಯಾಗಿ ಬಂದದ್ದು. ಕರ್ಣಾ, ನೀನು ನಿಜವಾಗಿಯೂ ಯೋಚಿಸಿರುವೆಯಾ? ಈ ಯುದ್ಧದಿಂದ ಎಷ್ಟೆಲ್ಲ ಅನರ್ಥ ಸಂಭವಿಸಬಹುದೆಂದು?

ಕರ್ಣ: ಬೇಕಾದಷ್ಟು ಯೋಚಿಸಿದ್ದೇವೆ ಕೃಷ್ಣಾ. ಕಂಸ, ಶಿಶುಪಾಲಾದಿ ದಾನವರನ್ನು ಲೀಲಾಮಾತ್ರದಿಂದ ಸಂಹರಿಸಿದ ನೀನು ಈ ಯುದ್ಧಕ್ಕಾಗಿ ಇನ್ನೂ ವಿಚಾರಮಾಡುತ್ತಿರುವೆಯಾ?

ಕೃಷ್ಣ: ಅದೇ ನಾನು ಹೇಳುತ್ತಿರುವುದು. ಈ ಯುದ್ಧದಿಂದ ವಿಜಯದ ಭವಿಷ್ಯ ಭವ್ಯವಾಗಿ ತಿಳಿಯುತ್ತಿದ್ದರೂ ಮತ್ತೆ ಯಾಕೆ ಅದನ್ನು ನಿಶ್ಚಯಗೊಳಿಸುವೆ?

ಕರ್ಣ: ಕೃಷ್ಣ! ಹೆಜ್ಜೆಹೆಜ್ಜೆಗೂ ಯುದ್ಧವು ಬೇಡ ಎಂದು ಹೇಳುವ ನಿನ್ನ ರಾಜಕೀಯ ತಂತ್ರದಲ್ಲಿ ಅಡಗಿದ ವಿಚಾರವನ್ನು ನಾನು ತಿಳಿದಿದ್ದೇನೆ. ನಿನ್ನ ಉದ್ದೇಶವೂ ಯುದ್ಧವೆ ಅಲ್ಲವೇ? ಆದರೀ ಯುದ್ಧ ಕೌರವರಿಂದಲೇ ನಿರ್ಣಯವಾಯಿತೆಂಬುದನ್ನು ನಿನಗೆ ಸ್ಪಷ್ಟಪಡಿಸಬೇಕಿತ್ತು. ನಿಜವಾದ ಕ್ಷತ್ರಿಯನು ಯುದ್ಧಕ್ಕಾಗಿ ಬೆದರುವನೇ? ಕೌರವನು ಕ್ಷಾತ್ರವೀರ. ಕ್ಷಾತ್ರೋಚಿತವಾಗಿ ನಡೆಯತಕ್ಕವನೇ ಹೊರತು ಯಾವ ಕಾರಣದಿಂದಲೂ ತನ್ನ ಛಲದಿಂದ ಚ್ಯುತನಾಗಲಾರ. ಇದರಿಂದ ನೀನು ಬಂದ ಕಾರ್ಯ ಸುಲಭವಾಗಿ ಸಾಧಿಸಿತು.

ಕೃಷ್ಣ: ನಿಜ ಕರ್ಣ! ಕುರು-ಪಾಂಡವರಲ್ಲಿ ಇಂದು ಉದ್ಭವಿಸಿದ ವಿಷಮ ಪರಿಸ್ಥಿತಿಯನ್ನು ಸುಧಾರಿಸಲು ಯುದ್ಧದ ಹೊರತು ಅನ್ಯಥಾ ಮಾರ್ಗವಿಲ್ಲವೆಂಬುದು ನಿಜ! ಆದರೆ, ನೀನೊಬ್ಬ ಮನಸ್ಸುಮಾಡಿದರೆ ಇದನ್ನು ನಿಲ್ಲಿಸಲೂ ಬಹುದು. ಕುರು-ಪಾಂಡವರ ಸಮಸ್ಯೆಯನ್ನು ಬಗೆ ಹರಿಸಬಹುದು.

ಕರ್ಣ: ಯಾದವೋತ್ತಮಾ! ಲೋಕೋತ್ತರ ಪುರುಷನಾದ ನಿನಗೆ ಸಾಧ್ಯವಿಲ್ಲದಿದ್ದುದು ನನಗೆ ಸಾಧ್ಯವೇ?

ಕೃಷ್ಣ: ಹೌದು. ಈ ಅನುಕೂಲತೆಯನ್ನು ನಿಸರ್ಗವೇ ನಿನಗೆ ಒದಗಿಸಿಕೊಟ್ಟಿದೆ.

ಕರ್ಣ: ಏನು ಹೇಳುತ್ತಿರುವೆ ಕೃಷ್ಣಾ! ಸೂತಪುತ್ರ ಎಂದು ಲೋಕ ವೆಲ್ಲ ಆಡಿಕೊಂಡು ಈ ಪ್ರಪಂಚದಲ್ಲಿ ಯಾವುದೂ ಸ್ಥಾನಮಾನವಿಲ್ಲದೇ ಇರುತ್ತಿರುವಾಗ ಏನೋ ನನ್ನ ಸ್ವಾಮಿಯ ಔದಾರ್ಯದಿಂದ ಇಷ್ಟು ಮಾತ್ರ ಬದುಕಿಕೊಂಡಿದ್ದೇನೆ. ಇಷ್ಟೇ ಹೊರತು ಯಾವ ಪ್ರಭಾವವುಂಟಯ್ಯಾ ಎನ್ನ ಜೀವನದಲ್ಲಿ!

ಕೃಷ್ಣ: ಈ ವಿಚಾರದಲ್ಲಿ ನಿನಗಿರುವ ಪ್ರಭಾವ ನನಗಿದ್ದರೆ ನಾನು ಈ ಯುದ್ಧವನ್ನು ನಿಲ್ಲಿಸಿ ಕುರುಪಾಂಡವರಿಬ್ಬರಿಗೂ ಸಂತೋಷದ ಪರಿಸ್ಥಿತಿ ಯನ್ನು ತರುತ್ತಿದ್ದೆ.

ಕರ್ಣ: ಅಂಥ ಯಾವ ಶಕ್ತಿಯನ್ನು ಈ ಸೂತಪುತ್ರನಲ್ಲಿ ಕಂಡಿರುವೆ ಮುರಾರಿ?

ಕೃಷ್ಣ: ಕರ್ಣಾ! ನೀನು ನಿಜವಾಗಿಯೂ ಸೂತಪುತ್ರನಲ್ಲ. ಕೌಂತೇ ಯನು ನೀನು. ಕುಂತಿಯಲ್ಲಿಯೇ ನಿನ್ನ ಜನ್ಮವಾಯಿತು. ರಾಧೆಯ ಪೋಷಣೆಯಿಂದ ರಾಧೇಯ ಎನ್ನಿಸಿಕೊಂಡೆ. ಹೀಗೆ ಪಾಂಡವನು ನೀನು. ಕುರುಸಮ್ರಾಟನ ಆತ್ಮೀಯ ಸಖತ್ವ ನಿನಗುಂಟು. ನೀನು ಹೇಳಿದ ಮಾತನ್ನು ಅವನು ಧಿಕ್ಕರಿಸಲಾರ. ಹಾಗಾಗಿ ಈ ಯುದ್ಧವನ್ನು ನಿಲ್ಲಿಸಿ ಇಬ್ಬರ ಶ್ರೇಯಸ್ಸನ್ನೂ ಸಾಧಿಸಲು ನಿನಗೆ ಸಾಧ್ಯವುಂಟು. ಏನು ಹೇಳುವೆ?

ಕರ್ಣ: ಇದೇನು ಹೇಳುತ್ತಿರುವೆ ಕೃಷ್ಣ? ಇದು ನಿಜವೇ?

ಕೃಷ್ಣ: ಇದು ನಿಜವಾದರೆ ನಾನು ಹೇಳಿದಂತೆ ಮಾಡಬಲ್ಲೆಯಾ? ವಸುದೇವನಾಣೆ, ತಾಯಿ ದೇವಕಿಯ ಆಣೆ— ಇದು ಸತ್ಯ ಸಂಗತಿ.

ಕರ್ಣ: ಹಾಗಾದರೆ ನನ್ನ ಜೀವನ ಈ ರೀತಿಯಾಗಲು ಕಾರಣವೇನು? "ಸೂತಪುತ್ರ", "ಹೀನ ಕುಲದವ" ಎಂದು ಹೇಳಿಸಿಕೊಳ್ಳಲು ನಾನು ಯಾವ ಮಹತ್ಪಾಪ ಮಾಡಿದ್ದೆನು?

ಕೃಷ್ಣ: ಕರ್ಣಾ! ನಿನ್ನ ಜನ್ಮವೃತ್ತಾಂತ ಈ ತನಕ ಪ್ರಪಂಚದಲ್ಲಿ ಯಾರಿಗೂ ತಿಳಿದಿಲ್ಲ. ನಿನ್ನ ತಂದೆ ಸೂರ್ಯದೇವ, ತಾಯಿ ಕುಂತಿ ಮತ್ತು ನನಗೆ ಇವರ ಹೊರತಾಗಿ ಇನ್ನಾರಿಗೂ ತಿಳಿದಿಲ್ಲ. ಹಿಂದೆ ನಿನ್ನ ತಾಯಿ ಕುಂತಿ ಬಾಲ್ಯದಲ್ಲಿ ಮಹರ್ಷಿಗಳ ಸೇವೆಯಿಂದ ದೇವತೆಗಳನ್ನು ವರಿಸುವ ಮಂತ್ರೋಪದೇಶ ಪಡೆದಳು. ಒಮ್ಮೆ ಪ್ರಯೋಗಾರ್ಥವಾಗಿ ಸೂರ್ಯ ಮಂತ್ರವನ್ನು ಜಪಿಸಲು, ಅದರ ಪರಿಣಾಮವಾಗಿ ನೀನು ಜನ್ಮತಾಳಿದೆ. ಲಗ್ನದ ಪೂರ್ವದಲ್ಲಿಯೇ ಈ ಘಟನೆ ಸಂಭವಿಸಿದ್ದರಿಂದ ಲೋಕಾಪವಾದಕ್ಕೆ ಹೆದರಿ, ಹುಟ್ಟಿದ ವೇಳೆಯಲ್ಲಿಯೇ ನಿನ್ನನ್ನು ಗಂಗಾನದಿಯಲ್ಲಿ ತೇಲಿಬಿಟ್ಟಳು. ನಂತರ ಸೂತಪುತ್ರನಿಗೆ ನೀನು ದೊರಕಿ ರಾಧೇಯನಾದೆ. ಅದರಿಂದ ಕರ್ಣಾ, ಈಗಲಾದರೂ ನೀನು ಜ್ಯೇಷ್ಠ ಪಾಂಡವನಾಗು. ಕೌಂತೇಯನಾಗು.

ಕರ್ಣ: ಈ ಮಾತುಗಳನ್ನು ಕೇಳುವಾಗ ಇದು ಕನಸೋ ಭ್ರಾಂತಿಯೋ ಎಂಬುದೇ ತಿಳಿಯುವದಿಲ್ಲ. ಹಾಗೊಮ್ಮೆ ಅದು ನಿಜವಿದ್ದರೂ ಈ ಯುದ್ಧ ಸಂದರ್ಭದಲ್ಲಿಯೇ ಅದನ್ನು ತಿಳಿಸುವ ನಿನ್ನ ತಂತ್ರಗಾರಿಕೆ ಏನಿರಬಹುದು? ಹಿಂದೆ ಅನೇಕ ಸಲ ನಾವು ಸಂಧಿಸಿದ್ದೇವೆ. ಆಗ ತಿಳಿಸಲಿಲ್ಲ. ಹಿಂದೆ ಆಚಾರ್ಯ ದ್ರೋಣರೊಡನೆ ಧನುರ್ವಿದ್ಯಾಪೇಕ್ಷೆಯಿಂದ ಹೋದಾಗ, ಅವರು ಹೀನಕುಲದವ ಎಂದು ನನ್ನನ್ನು ತಿರಸ್ಕರಿಸಿದಾಗ, ನನ್ನ ಜನ್ಮರಹಸ್ಯ ತಿಳಿಸಲಿಲ್ಲ. ಹಾಗೆ ಮತ್ತೊಮ್ಮೆ ದ್ರೋಣರ ಸಮ್ಮುಖದಲ್ಲಿಯೇ ಯುದ್ಧಕೌಶಲ್ಯ ತೋರಿಸುವ ಸಂದರ್ಭದಲ್ಲಿಯೂ "ಅರ್ಜುನನು—ಸೂತಪುತ್ರನೊಡನೆ ನಾನು ಯುದ್ಧಮಾಡುವದಿಲ್ಲ" ಎಂದು ಹೇಳಿದಾಗಲೂ ನನ್ನ ಜನ್ಮರಹಸ್ಯ ಬೆಳಕಿಗೆ ಬರಲಿಲ್ಲ. ಅಷ್ಟೇಕೆ, ದ್ರೌಪದಿಯ ಸ್ವಯಂವರದಲ್ಲಿ ಮತ್ಸ್ಯಯಂತ್ರ ಭೇದಿಸಲು ನಾನು ಹೊರಟಾಗ—ದ್ರೌಪದಿಯು ಸೂತಪುತ್ರ ಎಂದು ಅವಮಾನಮಾಡಿದಾಗಲೂ ನನ್ನ ಜನ್ಮರಹಸ್ಯ ತಿಳಿಸುವ ಕೃಪೆಮಾಡಲಿಲ್ಲ. ಆಗಲೂ ಸಭೆಯಲ್ಲಿದ್ದ ನೀನು ಸುಮ್ಮನೇ

ಕುಳಿತೆ. ಈಗ ಮಾತ್ರ ಈ ಯುದ್ಧಪ್ರಸಂಗದಲ್ಲಿ ಜನ್ಮರಹಸ್ಯ ತಿಳಿಸಲು ಬಂದೆ. ಅಲ್ಲವೇ ಕೃಷ್ಣಾ?

ಕೃಷ್ಣ: ನಿಜ. ಕುಂತಿಯ ಶೀಲರಕ್ಷಣೆಗಾಗಿ ಇದು ಗೌಪ್ಯವಾಗಿರುವುದು ಅವಶ್ಯವಿತ್ತು. ಈಗಲಾದರೂ ಇದನ್ನು ನಿನ್ನೊಡನೆ ಮಾತ್ರ ಏಕಾಂತದಲ್ಲಿ ಹೇಳುತ್ತಿದ್ದೇನೆ. ಯುದ್ಧದ ಬಗ್ಗೆ ಈಗಲಾದರೂ ಏನು ಹೇಳುತ್ತಿರುವೆ?

ಕರ್ಣ: ಹೇಳುವುದೇನಿದೆ ಕೃಷ್ಣಾ! ಯುದ್ಧದಿಂದ ನಾವು ಎಂದೂ ವಿಚಲಿತರಾಗುವದಿಲ್ಲ. ಆದರೆ ಈಗ ಮಾತ್ರ ನನ್ನನ್ನು ಧರ್ಮಸಂಕಟದಲ್ಲಿ ನೂಕಿದೆ. ಪಾಂಡವರು ಆತ್ಮೀಯರೆಂಬ ಮೋಹ ಹುಟ್ಟಿಸಿದೆ. ಆದರೂ ನಮ್ಮ ನಿರ್ಧಾರ ಬದಲಾಗಬಹುದೆಂದು ಊಹಿಸಿದೆಯಾ?

ಕೃಷ್ಣ: ನಿನ್ನ ನಿರ್ಧಾರದ ಬಗ್ಗೆ ಇನ್ನೂ ಕೆಲವು ಕಾಲ ವಿಚಾರಿಸು ಕರ್ಣ. ನೀನು ಒಪ್ಪಿದರೆ ಸಮ್ರಾಟನಾಗಬಹುದು. ನ್ಯಾಯವಾಗಿಯೂ ಈ ಭೂಮಿ ನಿನಗೇ ಸೇರತಕ್ಕದ್ದು. ಪಾಂಡವರು ನಿನ್ನನ್ನು ಹಿರಿಯಣ್ಣನೆಂದು ತಿಳಿಯುತ್ತಾರೆ. ಕುರು–ಪಾಂಡವರಲ್ಲೇ ನೀನು ಜ್ಯೇಷ್ಠನಾದುದರಿಂದ ಯುದ್ಧದ ಇಚ್ಛೆಯನ್ನು ಬಿಟ್ಟು ಶಾಂತನಾಗಿ ನೀನು ಪ್ರಯತ್ನಿಸಿದರೆ ಸಿಂಹಾಸನದಲ್ಲಿ ನಿನ್ನನ್ನೂ ಕೂಡ್ರಿಸಲು ಕೌರವನನ್ನು ನಾನು ಒಪ್ಪಿಸಬಲ್ಲೆ. ಇದರಿಂದ ಮುಂದಾಗುವ ಭಯಂಕರ ವಿಪ್ಲವ ತಪ್ಪಿ ಅವರಲ್ಲಿಯೂ ಸಮಾನವಾದ ಪ್ರೇಮಾದರ–ಬಾಂಧವ್ಯಗಳು, ಶಾಂತಿ–ಸೌಹಾರ್ದಗಳು ಬೆಳೆಯಬಹುದು. ಅದರಿಂದ ನನ್ನೀ ಇಚ್ಛೆಯನ್ನು ಮನ್ನಿಸಲಾರೆಯಾ ನೀನು?

ಕರ್ಣ: ಯಾದವಾಗ್ರಣೀ, ಇಚ್ಛಾಮಾತ್ರದಿಂದ ಸಮಗ್ರ ಪ್ರಪಂಚವನ್ನೇ ಕುಣಿಸಬಲ್ಲ ನಿನಗೆ ನಾನೆಷ್ಟರವ! ಹಾಗಿದ್ದರೂ ನನ್ನ ಹೃದಯಕ್ಕೆ ಜನ್ಮರಹಸ್ಯ, ಸಾಮ್ರಾಜ್ಯದ ಆಸೆ, ಇವನ್ನೆಲ್ಲ ತೋರಿಸಿ ವಂಚಿಸುವ ಹವ್ಯಾಸವೇಕೆ ನಿನಗೆ? ಯಾವ ಆಸೆ, ಆಮಿಷಕ್ಕೂ ನಾನು ಬಗ್ಗಲಾರೆ. ನಿನ್ನನ್ನು ದೇವನೆಂದು ನಾನು ಪೂಜಿಸುತ್ತೇನೆ. ಆದರೆ ನನ್ನ ನಿರ್ಧಾರವನ್ನು ಬದಲಿಸಲಾರೆ. ಕೃಷ್ಣಾ! ನೀನೇ ಉತ್ತರಿಸು. ಈ ಸಂದರ್ಭದಲ್ಲಿ ನಾನು ಸಿಂಹಾಸನಕ್ಕೆ ಆಸೆಪಟ್ಟರೆ, ಪಾಂಡವಪಕ್ಷಪಾತಿಯಾದರೆ ಜಗತ್ತು ಏನೆನ್ನಬಹುದು? ನನ್ನ ಗೌರವಕ್ಕಾಗಿ ಒಂದು ರಾಜ್ಯವನ್ನೇ ಕೊಟ್ಟ ನನ್ನ ಸ್ವಾಮಿಗೆ ನಾನೆಷ್ಟು ಅಪರಾಧಮಾಡಿದಂತಾಗಬಹುದು? ತ್ರಿಕಾಲದಲ್ಲಿಯೂ

ಇದು ಸಾಧ್ಯವಲ್ಲ, ಸಾಧುವೂ ಅಲ್ಲ. ಸರ್ವಥಾ ನಾನು ಒಪ್ಪಲಾರೆ. ಒಮ್ಮೆ ಪಾಂಡವರನ್ನು ತಮ್ಮಂದಿರೆಂದು ತಿಳಿಯಬಹುದು. ಆದರೆ ಸ್ವಾಮಿಯ ಸೇವೆಗೆ ವಿರುದ್ಧವಾಗಿ ಈ ಯುದ್ಧದಿಂದ ಬಹಿರ್ಮುಖನಾಗಲಾರೆ.

ಕೃಷ್ಣ: ಇದರಿಂದ ನಿನ್ನ ಸುಖವನ್ನು ನೀನು ಕಡೆಗಣಿಸಿದಂತಾಗುತ್ತದೆ.

ಕರ್ಣ: ಆಗಲಿ! ಅಂಥ ಸ್ವಾರ್ಥ ನನಗಿಲ್ಲ. ನನ್ನ ಜೀವನ ನನಗಾಗಿ ಅಲ್ಲ; ನನ್ನ ಸ್ವಾಮಿಯ ಸೇವೆಗಾಗಿ. ಸ್ವಾಮಿಯ ಸೇವೆಗಾಗಿ ಅದು ಮಣ್ಣು ಗೂಡಿದರೂ ಅದೇ ನನಗೆ ಪರಮಸುಖ. ನನ್ನ ಪುರುಷಾರ್ಥ. ಅದೇ ನನ್ನ ಜೀವನದ ಸಿದ್ಧಿ. ಯಾವುದೇ ಲೋಭ, ಮೋಹಗಳಿಂದ ಕರ್ತವ್ಯ ಭ್ರಷ್ಟನಾಗಲಾರೆ. ಮುಂದಾಗುವ ಯುದ್ಧದಲ್ಲಿ ನೀನು ಸಾಧಿಸಬೇಕೆಂದಿರು ವದೆಲ್ಲವನ್ನೂ ಒಂದೊಂದಾಗಿ ಸಾಧಿಸುತ್ತಿರುವೆ. ಪಾಂಡವರ ವಿಜಯ ಕ್ಕಾಗಿ ಬೇಕಾದ ಹಾಗೆ ನನ್ನ ಹೃದಯವನ್ನು ಛಿದ್ರಗೊಳಿಸಬಹುದಿತ್ತು. ಆದರೆ ಅದಕ್ಕಿಂತಲೂ ಹೆಚ್ಚಿನ ಕಾರ್ಯ ನಿನ್ನ ವಾಗ್ಬಾಣ ಮಾಡಿತು. ನನ್ನ ಜನ್ಮರಹಸ್ಯ ತಿಳಿಸಿದ್ದರಿಂದ ನನಗೆ ಧರ್ಮಸಂಕಟವುಂಟಾಗಿದೆ. ಪಾಂಡವ ರೆನ್ನ ಆತ್ಮೀಯರು. ಕೌರವನೆನ್ನ ಸ್ವಾಮಿ. ಯಾರಿಗೆ ದ್ರೋಹಬಗೆಯ ಬೇಕು, ಯಾರಿಗಾಗಿ ದುಡಿಯಬೇಕು? ಈ ಧರ್ಮಸಂಕಟದಿಂದ ನಿನ್ನ ಉದ್ದೇಶ ನೀನು ಸಾಧಿಸಿಕೊಂಡೆ ಅಲ್ಲವೆ ಕೃಷ್ಣ!

ಕೃಷ್ಣ: ನಿಜವಾಗಿ ಹೌದು ಕರ್ಣ! ಮುಂದಿನ ಯುದ್ಧದಿಂದ ಜಗತ್ತಿಗೆ ಅನೇಕ ಆದರ್ಶಗಳನ್ನು ತೋರಿಸಿಕೊಡುವ ಹಂಬಲ ನನ್ನದಾಗಿದೆ. ಜೀವಕೋಟಿಗಳಲ್ಲಿ ತುಂಬಿರುವ ಸ್ವಾರ್ಥ, ದಂಭ, ದುರಭಿಮಾನಗಳ ಉನ್ಮತ್ತತೆಯನ್ನು ಇಳಿಸಲು ಯುದ್ಧವಿಂದು ಅನಿವಾರ್ಯವಾಗಿದೆ. ಈ ಯುದ್ಧದ ನಂತರ ನಿಮ್ಮಂಥ ಮಹಾವೀರರ ಜೀವನ ಒಂದೊಂದು ತತ್ವ ವನ್ನೇ ಜಗತ್ತಿಗೆ ಸಾರಿಹೇಳಬಹುದು. ಆದರೆ, ನಾನು ನಡಿಸಿದ ಈ ಮಹಾ ಹೋರಾಟದಲ್ಲಿ ನಿನ್ನದು ಅಮರವಾಗಲಿದೆ. ಕರ್ಣ! ನಿನ್ನ ನಿಸ್ವಾರ್ಥ ಸೇವೆ, ನಂಬಿದವರಿಗೆ ಇಂಬುಗೊಡುವ ಪವಿತ್ರ ನಿರ್ಧಾರ, ಅಸೀಮ ತ್ಯಾಗ, ಇವು ಚಿರಂತನವಾಗಿ ಉಳಿದುಕೊಳ್ಳುತ್ತವೆ. ನನ್ನೀ ಕಾರ್ಯಕ್ಕೆ ನೆರವಾದು ದಕ್ಕೆ ನಿನ್ನನ್ನು ಅಭಿನಂದಿಸುವೆ. ಕರ್ಣ, ನೀನಿನ್ನು ಹಿಂತಿರುಗಬಹುದು.

ಕರ್ಣ: ಯೋಗೇಶ್ವರಾ, ಯಾವಕಾಲದಲ್ಲಿ ಏನು ಆಗಬೇಕಾಗಿದೆಯೋ ಅವೆಲ್ಲವನ್ನೂ ಮಾಡಿಸಿಕೊಳ್ಳಲು ಸಮರ್ಥನು ನೀನು. ಚರಾಚರ ಜಗತ್ತಿ

ಗೆಲ್ಲಾ ಸಾಕ್ಷಿಯಾಗಿದ್ದ ನೀನು ನನ್ನ ಕರ್ಮಗಳಿಗೂ ಸಾಕ್ಷಿಯಾಗಿರು. ನೀನು ಹೊತ್ತಿಸಿದ ಈ ಧರ್ಮಸಂಕಟಕ್ಕೂ ಸತ್ಯವಾದ ದಾರಿಯನ್ನು ನೀನೇ ಪ್ರೇರೇಪಿಸು. ನಿನಗೆ ಅನಂತ ನಮಸ್ಕಾರಗಳು.

## ದೃಶ್ಯ ೨

(ಸಮಯ—ಸಂಧ್ಯಾಕಾಲ. ಗಂಗಾತೀರದಲ್ಲಿ ಕರ್ಣನು ವಿಹಾರಮಾಡು ತ್ತಿದ್ದಾನೆ. ದೂರದಲ್ಲಿ ಕುಂತಿ ಬರುತ್ತಿದ್ದಾಳೆ.)

ಕರ್ಣ: (ಸ್ವಗತ) ಹುಂ! ಕೊನೆಗೂ ಕೃಷ್ಣ ತನ್ನ ಉದ್ದೇಶವನ್ನು ಸಾಧಿಸಿಯೇಕೊಂಡ. ಪಾಂಡವರು ಆತ್ಮೀಯರೆಂಬ ವ್ಯಾಮೋಹ ಹುಟ್ಟಿಸಿ ಹೃದಯದಲ್ಲಿ ಕಿಡಿಕಾರುತ್ತಿರುವ ದ್ವೇಷವನ್ನು ಕಿತ್ತುಹಾಕಿದ. ಯುದ್ಧದ ಸಮಯದಲ್ಲಿ ಹುಟ್ಟಬೇಕಾದ, ಬರಬೇಕಾದಂಥ ಸ್ಥೈರ್ಯ, ಶೌರ್ಯಗಳನ್ನೇ ಅಳಿಸಿದ. ಅಬ್ಬಾ! ಎಂಥ ತಂತ್ರಗಾರನಿವ! ಈಗಲೇ ಇದನ್ನು ತಿಳಿಸಿ ಬಿಟ್ಟನಲ್ಲ! ಎಂದಿನಿಂದಲೂ ನನ್ನ ಅಂತರಾತ್ಮ ಹೇಳುತ್ತಿತ್ತು—ನಾನು ಕ್ಷತ್ರಿಯಕುಲದವ ಎಂದು. ಆದಕ್ಕಾಗಿಯೇ ಕ್ಷಾತ್ರವಿದ್ಯೆ ಕಲಿತೆ, ಪ್ರತಿ ಯಿಲ್ಲದ ಪರಾಕ್ರಮಿಯೆನ್ನುವ ಪಾರ್ಥನನ್ನೂ ಎದುರಿಸಿದೆ. ಹಾಗಿದ್ದರೂ ನನ್ನ ಗುಣ, ಸ್ವಭಾವಗಳನ್ನು ತಿಳಿದೂ ಜನರು ಸೂತಪುತ್ರ ಎಂದು ಆಡಿ ಕೊಳ್ಳುತ್ತಿದ್ದರು. ಆದರೂ ಮುಂದಿನ ಯುದ್ಧದಿಂದ ಇದನ್ನು ತೋರಿಸಿ ಕೊಡುವ ಉದ್ದೇಶವಿತ್ತು. ಒಬ್ಬ ಸೂತಪುತ್ರನಿಂದ ಈ ರೀತಿ ಯುದ್ಧ ಮಾಡಲು ಸಾಧ್ಯವೇ ಎಂದು, ಜಗತ್ತಿನ ಜನ ಬೆರಳುಕಚ್ಚುವಂತೆ ನನ್ನ ಅಸಾಧಾರಣಶಕ್ತಿಯನ್ನು ತೋರಿಸಿಕೊಡಬೇಕೆಂದು ಮಾಡಿದ್ದೆ. ಇದರಿಂದ ಮುಂದಾದರೂ ಗುಣಕರ್ಮಗಳಿಗೆ ಜನ ಪ್ರಧಾನತೆ ಕೊಡಬಹುದು. ಜೀವ ನದ ಶ್ರೇಯಃ ಪ್ರೇಯಗಳೆಲ್ಲ ಗುಣಕರ್ಮದಿಂದ ಲಭ್ಯವಾಗುವ ಸಂಪ್ರದಾಯ ಹುಟ್ಟಿಬರಬಹುದು....! ಒಂದು ಬದಿಯಿಂದ ನನ್ನ ಜೀವನದ ಸಿದ್ಧಿಯ ಹಾದಿಯಲ್ಲಿ ಸಾಗುತ್ತಿದ್ದೇನೆಂಬ ಸಂತೋಷವಾಗುತ್ತಿದ್ದರೆ ಇನ್ನೊಂದು ಬದಿ ಯಲ್ಲಿ ಯಾವುದೋ ಅವ್ಯಕ್ತ ಸಂಕಟ. ಜನ್ಮದಿಂದಲೂ ಅನೇಕ ಸಂಕಟ ಕಂಡಿದ್ದರೂ ಇಂದಿನದು ಧರ್ಮಸಂಕಟವಾಗಿದೆ. ಇಷ್ಟು ವರ್ಷಗಳ ಕಾಲ ರಾಧೇಯನೆಂದು, ರಾಧೆಯ ಅಸೀಮ ವಾತ್ಸಲ್ಯದಿಂದ ಬೆಳೆದು ಇದೀಗ ಕೌಂತೇಯನೆಂದು ಹೇಳಿಸಿಕೊಳ್ಳುವುದು ನನ್ನ ಅಂತರಾತ್ಮಕ್ಕೆ ಒಪ್ಪಿಗೆ

ಯಾಗುವದಿಲ್ಲ. ಗೌರವದ ದೆಸೆಯಿಂದ ಕೌಂತೇಯನಾಗುವುದು ನನಗೆ ಬೇಕಾಗಿಲ್ಲ. ನಾನು ಎಂದೆಂದಿಗೂ ರಾಧೇಯನೇ! ಸೂತಪುತ್ರನೇ!

(ಅಷ್ಟರಲ್ಲಿ ಕುಂತಿಯು ಬರುತ್ತಾಳೆ.)

ಕುಂತಿ: ಅಲ್ಲ! ನೀನು ರಾಧೇಯನೂ ಅಲ್ಲ, ಸೂತಪುತ್ರನೂ ಅಲ್ಲ, ನೀನು ಕೌಂತೇಯ.

ಕರ್ಣ: ಯಾರು ಈ ಮಾತನ್ನು ಹೇಳುತ್ತಿರುವವರು? ಅಮ್ಮಾ, ಕುಂತಿದೇವಿ! ನೀನೇಕೆ ಇಲ್ಲಿಗೆ ದಯಮಾಡಿಸಿದೆ? ಕೃಷ್ಣನಂತೆಯೇ ನೀನೂ ನನ್ನ ಜನ್ಮರಹಸ್ಯ ತಿಳಿಸಲು ಬಂದೆಯಾ?

ಕುಂತಿ: ಹೌದು ಮಗನೇ. ನಿನ್ನನ್ನು ಕಾಣಲು ನಾನು ಅನೇಕ ದಿನಗಳಿಂದ ಹಂಬಲಿಸಿಕೊಂಡಿದ್ದೆ. ನೀನು ಕೌಂತೇಯನೆಂದು ತಿಳಿಸಿದರೆ ಮುಂದಿನ ಯುದ್ಧವು ನಿಲ್ಲಬಹುದೆಂದು ನನಗನಿಸಿತು.

ಕರ್ಣ: ಅಮ್ಮಾ! ಈ ಯುದ್ಧಕ್ಕಾಗಿ ನಾನು ಕೌಂತೇಯನಾಗಬೇಕೇ? ಇಲ್ಲಿಯ ವರೆಗೆ ಈ ರಹಸ್ಯ ರಹಸ್ಯವಾಗಿಯೇ ಉಳಿದು, ಈಗ ಮಾತ್ರ ನನಗೆ ತಿಳಿಸುವ ಮನಸ್ಸಾಯಿತೇ? ಹೀನಕುಲದವ ಎಂದು ಸಹಿಸಲಸಾಧ್ಯವಾದ ಮಾತುಗಳಿಂದ ನನ್ನ ಜೀವನ ಅವಹೇಳನಕ್ಕೆ ಗುರಿಯಾಗಿ ಹಾಳಾಗುತ್ತಿರುವಾಗಲೂ ಮರುಕಗೊಳ್ಳದ ನಿನ್ನ ತಾಯ್ತನದ ಹೃದಯ ಅಷ್ಟು ಕಠಿಣವೇ ಅಮ್ಮಾ!

ಕುಂತಿ: ಅಯ್ಯೋ ಕುಮಾರಾ! ನಿನ್ನ ಜನ್ಮದಿಂದಲೇ ಘಾಸಿಗೊಂಡ ನನ್ನ ಹೃದಯ ಇನ್ನೂ ಶಾಂತವಾಗಿಲ್ಲ. ಅದನ್ನು ನಿನಗೆ ಹೇಳಿ ನಿನ್ನನ್ನು ಸಂತೈಸಿದಾಗ ಶಾಂತವಾಗಬಹುದೆಂದು ಎಣಿಸಿದ್ದೆ. ಇದು ನಿನಗೆ ಪ್ರಿಯವಾದುದೆಂದು ತಿಳಿದಿದ್ದೆ. ಆದರೆ, ಅಣಕದ ಮಾತುಗಳಿಂದ ಮತ್ತಷ್ಟು ಘಾಸಿಗೊಳಿಸುವೆಯಾ? ಇನ್ನೂ ಸಹಿಸಲು ನನಗೆ ಶಕ್ತಿಯಿಲ್ಲದಾಗಿದೆ. ಮಗನೇ, ನೀನು ನನ್ನ ಉದರದಲ್ಲಿ ಹಿರಿಯಾಗಿ ಜನ್ಮಿಸಿದೆ.

ಕರ್ಣ: ಅದು ಜನ್ಮದಿಂದ ನನಗೆ ಬಂದಿರಬಹುದು. ಆದರೆ ಅದನ್ನು ಅನುಭವಿಸುವ ಭಾಗ್ಯ ನನಗಿಲ್ಲದಾಗಿದೆ ಅಮ್ಮಾ.

ಕುಂತಿ: ಹಾಗಾದರೆ ನನ್ನನ್ನು ತಾಯಿಯೆಂದು ತಿಳಿಯಲಾರೆಯಾ? ತಾಯೀ ಎಂದು ಕರೆಯಲಾರೆಯಾ?

ಕರ್ಣ: ದೇವಿ! ನನ್ನ ಹೃದಯದಲ್ಲಿ ತಾಯಿಗೆ ಎಂದು ಮೀಸಲಾದ ಸ್ಥಾನವು ರಾಧೆಯ ಹೊರತಾಗಿ ಇನ್ನಾರಿಗೂ ದೊರೆಯಲಾರದು. ನಿನ್ನನ್ನು ಅಸಾಧಾರಣ ಭಕ್ತಿಯಿಂದ ಪೂಜಿಸಬಲ್ಲೆ, ಗೌರವಿಸಬಲ್ಲೆ. ಆದರೆ ನನ್ನ ತಾಯಿಯು ಮಾತ್ರ ರಾಧೆಯೇ!

ಕುಂತಿ: ಇದೇನು ಹೇಳುತ್ತಿರುವೆ ಕುಮಾರಾ? ಹೆತ್ತ ಜನನಿಯ ಹೃದಯಕ್ಕೆ ಸಮಾಧಾನ ಹೇಳಲಾರೆಯಾ?

ಕರ್ಣ: ಯಾವ ಸಮಾಧಾನ ಹೇಳಲಿ ಅಮ್ಮಾ? ನಾನು ಜನ್ಮಿಸಿದಾಗ ನೀನು ಕೇವಲ ನಿನ್ನ ಮಾನರಕ್ಷಣೆಗಾಗಿ—ಮುಂದಿನ ನನ್ನ ಆಶೋತ್ತರಗಳನ್ನು ಅಲಕ್ಷಿಸಿ, ನಿಷ್ಕರುಣೆಯಿಂದ ಇದೇ ಗಂಗಾಮಾತೆಯ ಪ್ರವಾಹದಲ್ಲಿ ತೇಲಿಬಿಟ್ಟೆಯಂತೆ! ಆ ಪವಿತ್ರ ಪ್ರವಾಹದಲ್ಲಿ ತೇಲಿಬಂದ ನನ್ನನ್ನು ಉದ್ಧರಿಸಿದವರು ಯಾರು? ಬಾಲ್ಯದಿಂದಲೂ ಲಾಲನೆ, ಪಾಲನೆಮಾಡಿದವರು ಯಾರು? ಹೆತ್ತಾಡಿ, ಮುದ್ದಾಡಿ, ವಾತ್ಸಲ್ಯದ ಅಮೃತದಿಂದ ನನ್ನನ್ನು ಬೆಳೆಸಿದವರು ಯಾರು? ರಾಧೆಯಲ್ಲವೇ? ಈಗ ನಾನು ಕೌಂತೇಯನೆಂದು ಹೇಳಿಸಿಕೊಂಡರೆ ರಾಧೆಯ ಹೃದಯಕ್ಕೆ ಸಮಾಧಾನವಾಗಬಹುದೇ? ಇನ್ನು ನನ್ನ ಸ್ವಾಮಿ ಕೌರವ, ಪ್ರಪಂಚದಲ್ಲಿ ನನಗಾವ ಸ್ಥಾನವಿತ್ತು? ಅಂಗರಾಜ್ಯ ಕೊಟ್ಟು ಗೌರವಿಸಿದವನು ಕೌರವನಲ್ಲವೆ? ಈ ಯುದ್ಧ ಸಂದರ್ಭದಲ್ಲಿ ನಾನು ಜ್ಯೇಷ್ಠ ಪಾಂಡವನೆಂದು ಪಾಂಡವ ಪಕ್ಷಕ್ಕೆ ಸೇರಿದರೆ ಸಮಾಧಾನವಾಗಬಹುದೇ? ಆಗ ಲೋಕವು ನಗಲಾರದೇ? ನಾನು ನಿನ್ನ ಮಗನೇ ಆಗಿರಬಹುದು. ನಾನು ರಾಧೇಯನಾಗಿಯೇ ಬಾಳುತ್ತೇನೆ. ಕೌರವನಿಗಾಗಿಯೇ ದುಡಿಯುತ್ತೇನೆ.

ಕುಂತಿ: ಮಗನೇ! ನಾನೊಂದು ಆಶೆಯಿಂದ ಬಂದಿದ್ದೆ. ಇದೀಗ ನಿರಾಶೆಯಿಂದ ಹಿಂದಿರುಗಬೇಕೇ?

ಕರ್ಣ: ಅಮ್ಮಾ! ಇದೊಂದನ್ನು ಬಿಟ್ಟು ಬೇರೆ ಏನು ಕೇಳಿದರೂ ಈ ಕರ್ಣ ಕೊಡಬಲ್ಲ. ಏನು ಹೇಳಿದರೂ ನಡಿಸಬಲ್ಲ. ಆದರೆ ಕೌಂತೇಯನಾಗಲಾರೆ. ಪಾಂಡವಪಕ್ಷಪಾತಿಯಾಗಲಾರೆ.

ಕುಂತಿ: ಹೋಗಲಿ! ನೀನು ರಾಧೇಯನಾಗಿಯೇ ಬದುಕು. ಆದರೆ ಪಾಂಡವರನ್ನು ಇಷ್ಟೇಕೆ ದ್ವೇಷಿಸುವೆ?

ಕರ್ಣ: ದ್ವೇಷದ ವಿಚಾರವೆಲ್ಲಿ ಅಮ್ಮಾ! ಬಾಲ್ಯದಿಂದಲೂ ಅರ್ಜುನನಿಗೂ ನನಗೂ ಬಿಲ್ವಿದ್ಯೆಯು ಸ್ಪರ್ಧೆಯಿಂದ ಹಗೆತನ ಬೆಳೆಯಿತು. ನನ್ನ ಬಾಣವಿದ್ಯೆಯು ಕೌಶಲ್ಯವನ್ನು ಸಹಿಸಲಾರದೆ ಹೀನಕುಲದವ ಎಂದು ಹೀಯಾಳಿಸಿದ. ಕುಲ ಕುಲ ಎಂದು ಕೂಗುವ ಜನರ ದೃಷ್ಟಿಯನ್ನು ತೆರೆಯಿಸಿ, ಕುಲಕ್ಕಿಂತಲೂ ಗುಣಕ್ಕೆ ಪ್ರಾಧಾನ್ಯತೆ ಕೊಡಬೇಕು ಎನ್ನುವದನ್ನು ತೋರಿಸಿಕೊಡುವುದೂ ಈ ಯುದ್ಧದ ಉದ್ದೇಶವಾಗಿದೆ. ಅದರಿಂದ ಮುಂದಿನ ಯುದ್ಧದಲ್ಲಿ ನಾನಾದರೂ, ಅರ್ಜುನನಾದರೂ ಒಬ್ಬರೇ ಉಳಿಯಬಲ್ಲೆವು. ಇಬ್ಬರೂ ಜೀವಿಸುವುದು ಮಾತ್ರ ಸಾಧ್ಯವಿಲ್ಲ. ಹಾಗಿದ್ದರೂ ನಿನಗೆ ಐವರೇ ಮಕ್ಕಳುಳಿಯುತ್ತಾರೆ. ಚಿಂತಿಸಬೇಡ.

ಕುಂತಿ: ಆಗಲಿ! ಇನ್ನೊಂದು ಮಾತು ಕೇಳಿಕೊಳ್ಳುತ್ತೇನೆ. ನಡಿಸಿ ಕೊಡುವಿಯಾ?

ಕರ್ಣ: ಅಗತ್ಯವಾಗಿ ನಡಿಸಿಕೊಡುತ್ತೇನೆ. ಆಜ್ಞೆಯಾಗಲಿ!

ಕುಂತಿ: ಹಾಗಾದರೆ ಯುದ್ಧದಲ್ಲಿ ತೊಟ್ಟ ಬಾಣವನ್ನು ಪುನಃ ತೊಡಲಾರೆಯೆಂದು ಅಭಿವಚನ ಕೊಡು.

ಕರ್ಣ: ಇದು ತಾಯ್ತನದ ಹೃದಯದಿಂದ ಕೇಳಿದ ಮಾತೇ? ಯುದ್ಧದಲ್ಲಿ ಪಾಂಡವರಿಗೆ ಏನಾದರೂ ಅಪಾಯ ಸಂಭವಿಸಬಹುದೆಂದು ಊಹಿಸಿ ಈ ಮಾತು ಕೇಳಿದಿಯಾ? ನಿನ್ನ ಹೃದಯಮಂದಿರದಲ್ಲಿ ನನಗೆ ಸ್ಥಾನವಿಲ್ಲವೆಂಬುದು ಇದೇ ಹೇಳುತ್ತದೆ. ನನ್ನ ಭವಿಷ್ಯ ಸಂಪೂರ್ಣ ಹಾಳಾದರೂ ನಿನಗೆ ಚಿಂತೆಯಿಲ್ಲ. ಪಾಂಡವರು ಬದುಕಬೇಕು. ಹಾಗೇ ಆಗುತ್ತದೆ ಅಮ್ಮಾ! ಅಳುಕಬೇಡ, ಧೈರ್ಯವಾಗಿರು. ತೆಗೆದುಕೋ ನನ್ನ ಭಾಷೆಯನ್ನು! ಸಂತೋಷದಿಂದ ಕೊಡುತ್ತೇನೆ. ಮರೆಯಾಗುತ್ತಿರುವ ನನ್ನ ತಂದೆಯು ಸಾಕ್ಷಿಯಾಗಿ ಹೇಳುತ್ತೇನೆ: ಯುದ್ಧದಲ್ಲಿ ಎಂಥದೇ ಪ್ರಸಂಗ ಬಂದರೂ ಬಿಟ್ಟ ಬಾಣವನ್ನು ಪುನಃ ಬಿಡಲಾರೆ. ಸಮಾಧಾನವಾಯಿತೇ ಅಮ್ಮಾ?

ಕುಂತಿ: ಆಯಿತು ಕುಮಾರಾ! ನೀನು ಕೀರ್ತಿಶಾಲಿಯಾಗು!

ಕರ್ಣ: ನನ್ನದೂ ಒಂದು ಮಾತು ನಡಿಸಿಕೊಡುವಿಯಾ ಅಮ್ಮಾ? ನಿಜವಾಗಿಯೂ ನಾನು ನಿನ್ನ ಮಗನೇ ಆಗಿದ್ದರೆ, ಯುದ್ಧದಲ್ಲಿ ನಾನು

ಮರಣಹೊಂದಿದರೆ ನನ್ನ ಅಂತ್ಯಕ್ರಿಯೆಯನ್ನು ಧರ್ಮರಾಜನಿಂದಲೇ ಮಾಡಿಸುವಿಯಾ?

ಕುಂತಿ: ಕರ್ಣ, ಇದನ್ನು ಕೇಳಲು ನನಗೆ ಸಂಕಟವಾಗುತ್ತದೆ. ಹಾಗೊಮ್ಮೆ ಸಂಭವಿಸಿದರೆ ನಿಶ್ಚಯವಾಗಿಯೂ ಹಾಗೆಯೇ ನೆರವೇರಿಸುವೆ. ನಾನಿನ್ನು ಹೋಗುವೆ.

ಕರ್ಣ: ಕತ್ತಲಾಗುತ್ತ ಬಂತು, ಹೋಗವಮ್ಮಾ. ನಾನು ಜೀವಿಸಿರುವ ವರೆಗೆ ಇದನ್ನು ಎಲ್ಲಿಯೂ ಹೇಳಬೇಡ. ನಿನಗೆ ನಮಸ್ಕಾರ.

(ಕುಂತಿಯು ಹೋಗುವಳು.)

ಕರ್ಣ: (ಕ್ಷಣಕಾಲ ಚಿಂತಿಸಿ) ಜನ್ಮರಹಸ್ಯ ಹೇಳಿಯಾಯಿತು. ತೊಟ್ಟ ಬಾಣ ತೊಡದಿರುವಂತೆ ಭಾಷೆಯಾಯಿತು. ಒಂದಲ್ಲ, ಎರಡಲ್ಲ, ಇನ್ನೂ ಏನೇನು ಸಂಭವಿಸಲಿದೆಯೋ ಊಹಿಸಬಲ್ಲವರಾರು? ಬಾಳಿನ ಸಂಕಟಗಳು ಏನಿದ್ದರೂ ಇಂದು ಹೃದಯದ ಸಂಕಟ ಬಹು ದೊಡ್ಡದಾಗಿದೆ. ಪಾಂಡವರು ಆತ್ಮೀಯರು. ಅವರೊಡನೆ ಯುದ್ಧ ಮಾಡಬೇಕೇ? ಬಂಧು ಹತ್ಯೆ ಯೋಗ್ಯವೇ? ಇದನ್ನು ಬಿಟ್ಟರೆ ಕುರುಸಮ್ರಾಟನು ನನ್ನ ಸ್ವಾಮಿ. ಅವನ ಸೇವೆಯನ್ನು ನಿರಾಕರಿಸಲು ಸಾಧ್ಯವೇ? ಮುಂದಿನ ಯುದ್ಧಕ್ಕಿಂತ ಇಂದು ಹೃದಯದಲ್ಲಿ ಹುಟ್ಟಿದ ಈ ತುಮುಲ ಯುದ್ಧ ಇನ್ನೂ ದೊಡ್ಡದು. ಕೃಷ್ಣಾ! ನೀನಿಂದು ನನ್ನನ್ನು ಧರ್ಮಸಂಕಟದಲ್ಲಿ ಸಿಲುಕಿಸಿದೆ. ಧರ್ಮ ಸೂಕ್ಷ್ಮವನ್ನು ನಾನು ತಿಳಿಯಲಾರೆ. ಯಾವುದು ನ್ಯಾಯವೋ, ಯಾವುದು ಧರ್ಮವೋ ಆ ದಾರಿಯಲ್ಲಿ ನನ್ನನ್ನು ಮುನ್ನಡೆಸು. ಅನ್ಯಾಯ, ಅಧರ್ಮ, ಸ್ವಾರ್ಥ, ವಂಚನೆಗಳಿಂದ ಬಹುಕಾಲ ಬದುಕುವದಕ್ಕಿಂತ, ಸತ್ಯ, ನ್ಯಾಯ, ಸೇವೆ, ತ್ಯಾಗಗಳಿಂದ ಅಲ್ಪ ಕಾಲ ಬಾಳುವುದೇ ಲೇಸು. ಕಾಲದ ಪ್ರವಾಹ ದಲ್ಲಿ ನಾವು ಎಂದಾದರೂ ಸಾಗಬೇಕಲ್ಲವೇ? ಪ್ರವಾಹ ಎಲ್ಲವನ್ನೂ ಕೊಚ್ಚಿ ಕೊಂಡು ಹೋಗುತ್ತಿದ್ದರೂ ಅನಂತಕಾಲವೂ ಉಳಿಯುವದು, ಬದುಕು ವದು, ಅವನ ಧರ್ಮ, ಅವನ ನ್ಯಾಯ. ಹಾಗೇ ನನ್ನ ಧರ್ಮ ಉಳಿಯು ವಂತೆ ಈ ಧರ್ಮಸಂಕಟದಿಂದ ನನ್ನನ್ನು ಪಾರುಮಾಡು. ಕಾಲಾಯ ತಸ್ಮೈ ನಮಃ.

(ನಿಷ್ಕ್ರಮಣ).

▪▪▪▪▪▪▪▪▪

## ಒಂದಾಣೆ ಮಾಲೆಯಲ್ಲಿ
## ಈ ವರೆಗೆ ಪ್ರಕಟವಾದ
## ನಲ್ವತ್ತೇಳು ಏಕಾಂಕ ನಾಟಕಗಳು

**ಪ್ರತಿಯೊಂದಕ್ಕೆ ಒಂದಾಣೆ.** **ಪುಟಗಳು: 16 + 4.**

| | | |
|---|---|---|
| ೧ | ನಾರೀಶ್ವರರು (ಪ್ರಹಸನ) | ಕುಡ್ವಿ ವಾಸುದೇವ ಶೆಣೈ. |
| ೨ | ಬಾಬಿಗೆ ಬಾಸಿಂಗ ,, | ,, ,, ,, |
| ೩ | ಸತ್ಯವಂತ ಬಾಬಿ ,, | ,, ,, ,, |
| ೪ | ಮರ್ಜಿ ,, | ದಿ। ಎಮ್. ಎನ್. ಕಾಮತ್. |
| ೫ | ಸತೀ ಸಾವಿತ್ರಿ (ಪೌರಾಣಿಕ) | ಶ್ರೀ। ಪಿ. ವೆಂಕಟ್ರಮಣ ಭಟ್ಟ. |
| ೬ | ಅಕಾಂಡ ತಾಂಡವ (ರೇಡಿಯೊ ನಾಟಕ) | ಶ್ರೀ। ಬಿ. ದಾಮೋದರ ಬಾಳಿಗ, ಬಿ. ಎ. |
| ೭ | ಮೀರಾಬಾಯಿ (ಐತಿಹಾಸಿಕ) | ಶ್ರೀ। ಸಂ. ಜ. ರಾವ್. |
| ೮ | ಚುಟ್ಟ ಬಿಟ್ಟ ದಿಟ್ಟ (ಪ್ರಹಸನ) | ಡಾ। ಎಸ್. ಪಿ. ಭಟ್. |
| ೯ | ಜರಾಸಂಧ ವಧೆ (ಪೌರಾಣಿಕ) | ಶ್ರೀ। ಎ. ವಿ. ಮಯ್ಯ. |
| ೧೦ | ಸತ್ಯಹರಿಶ್ಚಂದ್ರ (ಪೌರಾಣಿಕ) | ಶ್ರೀ। ಪಿ. ವೆಂಕಟ್ರಮಣ ಭಟ್ಟ. |
| ೧೧ | ಮಾಯಾಮೃಗ ( ,, ) | ಶ್ರೀ। ಎ. ವಿ. ಮಯ್ಯ. |
| ೧೨ | ಸತೀವೃಂದಾ ( ,, ) | ಶ್ರೀ। ಕೆ. ಸುಭಾಷಚಂದ್ರ ಶೆಣೈ. |
| ೧೩ | ಗೌತಮನ ಗೃಹತ್ಯಾಗ, ಸಿದ್ಧಾರ್ಥನ ಕಾರುಣ್ಯ | ಶ್ರೀ। ಎಲ್. ಎಸ್. ನಾಯಕ್. |
| ೧೪ | ಪುನರುಜ್ಜೀವನ (ಸಾಮಾಜಿಕ) | ಶ್ರೀ। ಗೋವಿಂದ ಭಟ್ಟ. |
| ೧೫ | ಸ್ವಾತಂತ್ರ್ಯ ( ,, ) | ಶ್ರೀ। ಕೆ. ಎನ್. ಭಟ್, ಶಿರಾಡಿಪಾಲ್. |
| ೧೬ | ಭಕ್ತಕುಚೇಲ (ಪೌರಾಣಿಕ) | ಶ್ರೀ। ಅಂಬಾತನಯ. |
| ೧೭ | ಮದ್ವೆ ಅವಾಂತರ (ಪ್ರಹಸನ) | ಅಷ್ಟಾವಕ್ರ. |
| ೧೮ | ಗ್ರಾಮಸ್ವಾತಂತ್ರ್ಯ ,, | ಶ್ರೀ। ಎ. ವಿ. ಮಯ್ಯ. |
| ೧೯ | ಭಕ್ತ ಧ್ರುವ (ಪೌರಾಣಿಕ) | ಶ್ರೀ। ಸುಬ್ರಾಯ. |
| ೨೦ | ಬೇಡನ ಮಗಳು ,, | ಶ್ರೀ। ವೆಂಕಟರಾಜ ಪುಣಿಂಚತ್ತಾಯ. |
| ೨೧ | ಪುರಂದರದಾಸರು (ಐತಿಹಾಸಿಕ) | ಬಿ. ಪದ್ಮನಾಭ ಸೋಮಯಾಜಿ. |
| ೨೨ | ವೀರಾಗ್ರಣಿ ಕರ್ಣ (ಪೌರಾಣಿಕ) | ಶ್ರೀ। ಅಮ್ಮೆಂಬಳ ಅನಂತಯ್ಯ ನಾವಡ. |

| | | | |
|---|---|---|---|
| ೩೩ | ಕುಶ-ಲವ | ,, | ಶ್ರೀ। ಬಿ. ಈಶ್ವರಯ್ಯ. |
| ೩೪ | ಅಕ್ಷಯಪಾತ್ರೆ | (ಸಾಮಾಜಿಕ) | ಶ್ರೀ। ಟಿ. ಚಂದ್ರರಾಜ ಸೆಟ್ಟಿ |
| ೩೫ | ವೈರಾಗ್ಯಸಿಧಿ | (ತರಂಗರೂಪಕ) | ಶ್ರೀ। ಕೆ. ಎಸ್. ಶರ್ಮ, ವಿದ್ವಾನ್. |
| ೩೬ | ಭರತನ ಬಂಧುಪ್ರೇಮ | (ಪೌರಾಣಿಕ) | ಶ್ರೀ। ಅಮ್ಮೆಂಬಳ ಅನಂತಯ್ಯ ನಾವಡ. |
| ೩೭ | ಮಹಾತ್ಮಾ ಉದಂಕ | ( ,, ) | ಶ್ರೀ। ಮಣಿಲ 'ಶಿವಶಂಕರ', ಪುಣಚಾ. |
| ೩೮ | ಭಕ್ತ ಪ್ರಹ್ಲಾದ | ( ,, ) | ಶ್ರೀ। ಎ. ವಿ. ಮಯ್ಯ. |
| ೩೯ | ಅಭಿಮನ್ಯು | ,, | ಶ್ರೀ। ಬಿ. ಈಶ್ವರಯ್ಯ. |
| ೪೦ | ವಿಷಬೀಜ | ,, | ಶ್ರೀ। ಕೆ. ಗೋವಿಂದ ಭಟ್ಟ. |
| ೪೧ | ಬಲಿ ಬಂಧನ | ,, | ಶ್ರೀ। ಎಸ್. ತಿರುಮಲೇಶ್ವರ ಭಟ್. |
| ೪೨ | ಶಕುಂತಲಾ | ,, | ಶ್ರೀ। ಬಿ. ಈಶ್ವರಯ್ಯ. |
| ೪೩ | ರುಕ್ಮಾಂಗದ | ,, | ಶ್ರೀ। ಅಂಬಾತನಯ, ಮುದ್ರಾಡಿ. |
| ೪೪ | ಸತ್ಯಭಾಮಾ ಗರ್ವಭಂಗ | ,, | ಶ್ರೀ। ಸಿ. ಗೋಪಾಲಕೃಷ್ಣಾಚಾರ್ಯ. |
| ೪೫ | ಶರಸೇತು | ,, | ಶ್ರೀ। ನಾರಾಯಣ. |
| ೪೬ | ದೀಪಾವಳಿ | (ಸಾಮಾಜಿಕ) | ದಿ। ಕುಡ್ವಿ ಚಂದ್ರಕಾಂತ ಶೆಣೈ. |
| ೪೭ | ಶಂಭುಕವಧೆ | (ಪೌರಾಣಿಕ) | ಶ್ರೀ। ವೀ. ಬೀ. ಮಧುರಂ. |
| ೪೮ | ರಾಜಾ ಭರ್ತೃಹರಿ | ,, | 'ರಸಿಕ', ಪುತ್ತಿಗೆ. |
| ೪೯ | ಶರಶಯ್ಯೆ (ರೇಡಿಯೊ) | ,, | ಶ್ರೀ। ಬಿ. ವಿ. ಶೆಣೈ. |
| ೫೦ | ಕನಕದಾಸರು | (ಐತಿಹಾಸಿಕ) | ಶ್ರೀ। ಬಿ. ಪದ್ಮನಾಭ ಸೋಮಯಾಜಿ. |
| ೫೧ | ರಾಮರಾಜ್ಯದ ಮಡಿವಾಳ | (ಪೌರಾಣಿಕ) | ಶ್ರೀ। ಡಿ. ಮಹಾಲಿಂಗ ಭಟ್ಟ. |
| ೫೨ | ಭಸ್ಮಾಸುರ ಮೋಹಿನಿ | ,, | ಶ್ರೀ। ಸಿ. ಗೋಪಾಲಕೃಷ್ಣಾಚಾರ್ಯ. |
| ೫೩ | ಗೋಪಾಲನ ಸ್ವಾಮ್ಯ | | ಶ್ರೀ। ಪಡಾರು ಮಹಾಬಲೇಶ್ವರ ಭಟ್ಟ. |
| ೫೪ | ನರವೀರ ನೃಪತುಂಗ | | ಶ್ರೀ। ಉಡುಪಿ ಶ್ರೀನಿವಾಸರಾವ್. |
| ೫೫ | ಫಲೋದಯ | (ಪೌರಾಣಿಕ) | ವಿದ್ವಾನ್ ಎಂ. ಗೋಪಾಲಕೃಷ್ಣ ಭಟ್ಟ. |
| ೫೬ | ಮಾಯಾವಿನಿ | ,, | ,, ,, |
| ೫೭ | ಧರ್ಮಸಂಕಟ | ,, | ಶ್ರೀ। ತದ್ವಲಸೆ ವಿಘ್ನೇಶ್ವರ ಶರ್ಮ. |

ಒಂದಾಣೆ ಮಾಲೆ, ಪ್ರಭಾತ ಆಫೀಸು,

ರಥಬೀದಿ, ಮಂಗಳೂರು-೧.

Edited, Printed & Published by K. V. Shenoy
at The Prabhat Printers, Ltd., Mangalore.